# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : **1119**

ಸದಸ್ಯರ ಹೆಸರು : ಡಾ: ವೈ ಎ ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ)

ಉತ್ತರಿಸಬೇಕಾದ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸಬೇಕಾದ ದಿನಾಂಕ : 13-03-2020

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಕೆಲವು ಖಾಸಗಿ ಟ್ರಾನ್ಸ್‌ಪೋರ್ಟ್ ಕಂಪನಿಗಳು ಒಂದೇ ವಾಹನದ ಸಂಖ್ಯೆ/ಪರವಾನಗಿಯನ್ನು ಬಳಸಿ 2-3 ಬಸ್ಸುಗಳನ್ನು ಚಲಾಯಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ರಾಜ್ಯದಲ್ಲಿ ಕೆಲವು ಖಾಸಗಿ ಟ್ರಾನ್ಸ್‌ಪೋರ್ಟ್ ಕಂಪನಿಗಳು ಅವರು ಹೊಂದಿದ ಪರವಾನಿಗೆಯನ್ನು ಬಳಸಿ ಕೆಲವು ಬಸ್ಸುಗಳನ್ನು ತೆರಿಗೆ ಪಾವತಿಸದೆ ಮತ್ತು ಪರವಾನಿಗೆ ನಿಯಮ ಉಲ್ಲಂಘನೆಮಾಡಿ ಬಸ್ಸುಗಳನ್ನು ಚಲಾಯಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ | ಬಂದಿದ್ದಲ್ಲಿ, ಇಂತಹ ಎಷ್ಟು ಪ್ರಕರಣಗಳು ಬೆಳಕಿಗೆ ಬಂದಿವೆ (ಜಿಲ್ಲಾವಾರು ವಿವರಗಳನ್ನು ನೀಡುವುದು) | ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಮಾತ್ರ ಒಂದು ಪ್ರಕರಣ ಕಂಡುಬಂದಿರುತ್ತದೆ.<br><br>ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಒಂದೇ ವಾಹನದ ಸಂಖ್ಯೆ ಬಳಸಿ 02 ಬಸ್ಸುಗಳನ್ನು ಚಲಾಯಿಸುತ್ತಿದ್ದ ಪ್ರಕರಣವನ್ನು ಪ್ರವರ್ತನ ಚಟುವಟಿಕೆಯಲ್ಲಿ ನಿರತರಾಗಿದ್ದ ತನಿಖಾಧಿಕಾರಿಗಳು ಗಮನಿಸಿ ವಾಹನದ ಮಾಲೀಕರ ವಿರುದ್ಧ ಕ.ಮೋ.ವಾ.ತೆರಿಗೆ ಕಾಯ್ದೆ ಮತ್ತು ನಿಯಮಗಳಡಿಯಲ್ಲಿ ಪ್ರಕರಣವನ್ನು ದಾಖಲಿಸಲಾಗಿದ್ದು ಸದರಿ ವಾಹನ ಮಾಲೀಕರಿಂದ ತೆರಿಗೆ ಮತ್ತು ದಂಡ ವಸೂಲಾತಿಗೆ ನಿಯಮಾನುಸಾರ ಕ್ರಮಕೈಗೊಳ್ಳಲಾಗುತ್ತಿದೆ. |
| ಇ | ಇಂತಹ ಪ್ರಕರಣಗಳಲ್ಲಿ ಭಾಗಿಯಾಗಿರುವವರ ವಿರುದ್ಧ ಸರ್ಕಾರವು ಕೈಗೊಂಡಿರುವ ಕಠಿಣ ಕ್ರಮಗಳೇನು? | ವಾಹನವನ್ನು ತಪಾಸಿಸಿ ವಶಪಡಿಸಿಕೊಳ್ಳಲಾಗಿದೆ. |
| ಈ | ಇಂತಹ ಪ್ರಕರಣಗಳ ಬಗ್ಗೆ ಗೊತ್ತಿದ್ದರೂ ಇಂತಹವರ ಜೊತೆ ಶಾಮೀಲಾಗಿರುವ ಅಧಿಕಾರಿಗಳ ವಿರುದ್ಧ ಸರ್ಕಾರವು ಕೈಗೊಂಡ ಕ್ರಮಗಳೇನು? | ಇಂತಹ ಪ್ರಕರಣಗಳ ಬಗ್ಗೆ ಗೊತ್ತಿದ್ದೂ ಇಂತಹವರ ಜೊತೆ ಅಧಿಕಾರಿಗಳು ಶಾಮೀಲಾಗಿರುವ ಪ್ರಕರಣಗಳು ಯಾವುದು ಇರುವುದಿಲ್ಲ. ಗಮನಕ್ಕೆ ಬಂದಲ್ಲಿ ಸೂಕ್ತ ಶಿಸ್ತು ಕ್ರಮಕೈಗೊಳ್ಳಲಾಗುವುದು. |

ಟಿಡಿ 29 ಟಿಡಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು